# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1432
ಸದಸ್ಯರ ಹೆಸರು :ಶ್ರೀ ಸುನೀಲ್ ಗೌಡ ಬಿ. ಪಾಟೀಲ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವ ದಿನಾಂಕ : 23.09.2021
ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಯವರು

| ಪ್ರಶ್ನೆ | ಉತ್ತರ |
|---|---|
| (ಅ) ಕರ್ನಾಟಕ ಸಿವಿಲ್ ಸೇವಾ ನಿಯಮಗಳು 1958ರ ಪ್ರಕಾರ ಪರೀಕ್ಷಾರ್ಥಿ ನೌಕರರು (Probationer) ಖಾಯಂ ನೌಕರರ ಅಥವಾ ಹಂಗಾಮಿ ಸರ್ಕಾರಿ ನೌಕರರದೇ; ತಿಳಿಸುವುದು; | ಕರ್ನಾಟಕ ಸಿವಿಲ್ ಸೇವಾ ನಿಯಮಾವಳಿಗಳು 1958ರ ನಿಯಮ 8(37)ರನ್ವಯ "ಪ್ರೊಬೇಷನರ್" (Probationer) (ಪರೀಕ್ಷಾರ್ಥಿ ನೌಕರ) ಎಂಬ ಪದವು ಕರ್ನಾಟಕ ಸಿವಿಲ್ ಸೇವಾ (ಪ್ರೊಬೇಷನ್) ನಿಯಮಗಳು, 1977ರ ಮೇರೆಗೆ ಅದಕ್ಕೆ ಕೊಟ್ಟಿರುವ ಅರ್ಥವನ್ನೇ ಹೊಂದಿರತಕ್ಕದ್ದು.<br>ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳು 1958ರ ನಿಯಮ 8(37)ರ ಟಿಪ್ಪಣಿ 1ರನ್ವಯ ಪ್ರೊಬೇಷನರನ್ನು ಎಲ್ಲ ಉದ್ದೇಶಗಳಿಗಾಗಿ ಹಂಗಾಮಿ ಸರ್ಕಾರಿ ನೌಕರನೆಂದು ಪರಿಗಣಿಸತಕ್ಕದ್ದು. |
| (ಆ) ಪ್ರೊಬೇಷನ್ ಮೇಲೆ ನೇಮಿಸಲಾದ ನೌಕರರ ಹುದ್ದೆಯು, ಕರ್ನಾಟಕ ಸಿವಿಲ್ ಸೇವಾ (ಪ್ರೊಬೇಷನ್) ನಿಯಮಗಳು, 1977ರ ಯಾವ ನಿಯಮದ ಪ್ರಕಾರ ಖಾಯಂಗೊಂಡು ಸ್ಥಿರೀಕರವಾಗುತ್ತದೆಯೇ; (confirmed) | ಪರಿವೀಕ್ಷಣಾವಧಿಯ ಮೇಲೆ ನೇಮಿಸಲಾದ ನೌಕರರ ಹುದ್ದೆಯು ಕರ್ನಾಟಕ ನಾಗರಿಕ ಸೇವಾ (ಪರಿವೀಕ್ಷಣೆ) ನಿಯಮಗಳು, 1977ರ ನಿಯಮ 5(1)(ಎ) ರನ್ವಯ ಪ್ರೊಬೇಷನರನು ಪರಿವೀಕ್ಷಣಾವಧಿಯನ್ನು ತೃಪ್ತಿಕರವಾಗಿ ಪೂರ್ಣಗೊಳಿಸಿರುವುದಾಗಿ ಘೋಷಿಸಿರುವ ಆದೇಶವನ್ನು ಹೊರಡಿಸಿದ ನಂತರ ಸದರಿ ನಿಯಮಗಳ ನಿಯಮ 9ರನ್ವಯ ಹುದ್ದೆಯು ಸ್ಥಿರೀಕರಣಗೊಳ್ಳುತ್ತದೆ. |
| (ಇ) ಕರ್ನಾಟಕ ಸಿವಿಲ್ ಸೇವಾ (ಪ್ರೊಬೇಷನ್) ನಿಯಮಗಳು, 1977ರ ನಿಯಮ 3,4 ( ) ಹಾಗೂ 4 ( )ರ ಪ್ರಕಾರ ಪರೀಕ್ಷಾ ಅವಧಿ ಘೋಷಣೆಯಾದ (confirmed) ನೌಕರರ ನಡುವಿನ ಜೇಷ್ಠತೆಯನ್ನು ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ) ನಿಯಮಗಳು 1957ರ ನಿಯಮ 2(ಬಿ) ಪ್ರಕಾರ ಖಾಯಂ (confirmed) ಆದ ದಿನಾಂಕಗಳಿಗೆ ಅನುಸಾರವಾಗಿ ನಿರ್ಧರಿಸಬೇಕೆ; (ವಿವರ ನೀಡುವುದು) | ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 3, 4(i) ಹಾಗೂ 4(ii) ರ ಪ್ರಕಾರ ಪರೀಕ್ಷಾರ್ಥ ಅವಧಿ ಘೋಷಣೆಯಾದ (Confirmed) ನೌಕರರ ನಡುವಿನ ಜೇಷ್ಠತೆಯನ್ನು ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ) ನಿಯಮಗಳು 1957ರ ನಿಯಮ 5ರನ್ವಯ ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ ನೇರ ನೇಮಕಾತಿಯ ಮುಖಾಂತರ ನೇಮಕಾತಿ ಹೊಂದಿದ ಅಭ್ಯರ್ಥಿಗಳು ನೇಮಕಾತಿ |

| | |
|---|---|
| | ಹೊಂದಿದ ದಿನಾಂಕದಿಂದ ಜೇಷ್ಠತೆಗೆ ಅರ್ಹರಾಗುತ್ತಾರೆ. ಅಂದರೆ, ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 18ರನ್ವಯ, ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ ನೇರ ನೇಮಕಾತಿ ಹೊಂದಿದ ನೌಕರರು ನೇಮಕಾತಿ ಆದೇಶದಲ್ಲಿ ನಿಗದಿಪಡಿಸಿದ ಕಾಲಮಿತಿಯೊಳಗೆ ಕರ್ತವ್ಯಕ್ಕೆ ಹಾಜರಾದಲ್ಲಿ, ಅವರ ಜೇಷ್ಠತೆಯನ್ನು ಆಯ್ಕೆ ಪಟ್ಟಿಯಲ್ಲಿರುವಂತೆ ನಿರ್ಧರಿಸಬೇಕು. |
| (ಈ) ಪರೀಕ್ಷಾರ್ಥಿ ನೌಕರರ ಹಾಗೂ ಖಾಯಂಗೊಂಡ ಸರ್ಕಾರಿ ನೌಕರರ ಜೇಷ್ಠತೆ ಬಗ್ಗೆ, ಕರ್ನಾಟಕ ಉಚ್ಚ ನ್ಯಾಯಾಲಯವು i) Kalyana Rao V. State of Mysore-W.P. No.95/1968 ii) Snambhat Joshi vs State of Mysore WP 336 of 1970 [1974(1) Kar L.J SN at 13] iii) Veerabhadraiah v. State of Mysore [1971 (20 Mys L.J SN 133] ಪ್ರಕರಣಗಳಲ್ಲಿ ಹೊರಡಿಸಿದ ಆದೇಶಗಳು ಯಾವುವು (ಪ್ರತಿ ಒದಗಿಸುವುದು) | ಕರ್ನಾಟಕ ಉಚ್ಚ ನ್ಯಾಯಾಲಯವು i) Kalyana Rao V. State of Mysore-W.P. No.95/1968 ii) Snambhat Joshi vs State of Mysore WP 336 of 1970 [1974(1) Kar L.J SN at 13] iii) Veerabhadraiah v. State of Mysore [1971 (20 Mys L.J SN 133] ಪ್ರಕರಣಗಳಲ್ಲಿ ನೀಡಿರುವ ಆದೇಶದ ಹಿನ್ನೆಲೆಯಲ್ಲಿ ಪರೀಕ್ಷಾರ್ಥ ನೌಕರರ ಹಾಗೂ ಖಾಯಂಗೊಂಡ ಸರ್ಕಾರಿ ನೌಕರರ ಜೇಷ್ಠತೆ ಬಗ್ಗೆ, ಸರ್ಕಾರದಿಂದ ಯಾವುದೇ ಆದೇಶವನ್ನು ಹೊರಡಿಸಿರುವುದಿಲ್ಲ. |
| (ಉ) ರಾಜ್ಯದ ವಿವಿಧ ಜಿಲ್ಲಾ ಕೇಡರ್ ಹುದ್ದೆಗಳಿಗೆ ರಾಜ್ಯ ಮಟ್ಟದಲ್ಲಿ ಒಂದೇ ಮಟ್ಟದಲ್ಲಿ ಒಂದೇ ಕೇಂದ್ರಿಕೃತ ಆಯ್ಕೆ ಪ್ರಾಧಿಕಾರ ಮುಖಾಂತರ ಒಂದೇ ಅಧಿಸೂಚನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಿ ಒಂದೇ ದಿನಾಂಕದಂದು ಪರೀಕ್ಷೆ ನಡೆಸಿ ಹಾಗೂ ಒಂದೇ ದಿನಾಂಕದಂದು ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಿಸಿದಲ್ಲಿ ಈ ತಾತ್ಕಾಲಿಕ ಆಯ್ಕೆ ಪಟ್ಟಿಯ ಆಧಾರದ ಮೇಲೆ ವಿವಿಧ ಜಿಲ್ಲಾ ನೇಮಕಾತಿ ಪ್ರಾಧಿಕಾರಗಳು ಒಂದೇ ದಿನಾಂಕದಂದು ನೇಮಕಾತಿ ಆದೇಶ ಹೊರಡಿಸಬೇಕೆಂಬುದರ ಬಗ್ಗೆ ಸರ್ಕಾರದಲ್ಲಿ ಯಾವುದಾದರೂ ನಿಯಮ/ಆದೇಶವಿದೆಯೇ? (ಇದ್ದಲ್ಲಿ, ಇದರ ಪ್ರತಿ ನೀಡುವುದು) | ಯಾವುದೇ ಆದೇಶ ಹೊರಡಿಸಿರುವುದಿಲ್ಲ. |

ಸಂಖ್ಯೆ: ಸಿಆಸುಇ 159 ಸೇನೆನಿ 2021

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ